# ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | 116(71) |
| ಸದಸ್ಯರ ಹೆಸರು | ಶ್ರೀ.ಆರ್.ಬಿ.ತಿಮ್ಮಾಪೂರ (ವಿಧಾನ ಸಭೆಯಿಂದ ಚುನಾಯಿತರಾದವರು) |
| ವಿಷಯ | ಕೋವಿಡ್ ಮೃತರಿಗೆ ಪರಿಹಾರ ಬಗ್ಗೆ |
| ಉತ್ತರಿಸಬೇಕಾದ ದಿನಾಂಕ | 13.12.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| ಪ್ರಶ್ನೆ | ಉತ್ತರ |
| ಅ) ಕೋವಿಡ್ ನಿಂದಾಗಿ ಮೃತರಾದ ಕುಟುಂಬದವರಿಗೆ ಮರಣ ಪರಿಹಾರವನ್ನು ಪಡೆಯಲು ತೊಡಕಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಆ) ಬಂದಿದ್ದಲ್ಲಿ, ತೊಡಕುಗಳನ್ನು ನಿವಾರಿಸಲು ಕೈಗೊಂಡಿರುವ ಕ್ರಮಗಳೇನು; | ಅನ್ವಯಿಸುವುದಿಲ್ಲ |
| ಇ) ಬಾಗಲಕೋಟೆ ಜಿಲ್ಲೆಯಲ್ಲಿ ಈವರೆಗೆ ಎಷ್ಟು ಅರ್ಜಿಗಳು ಸ್ವೀಕೃತವಾಗಿವೆ; ಎಷ್ಟು ಜನರಿಗೆ ಪರಿಹಾರ ವಿತರಿಸಲಾಗಿದೆ? | ದಿನಾಂಕ: 06.12.2021ರವರೆಗೆ ಬಾಗಲಕೋಟೆ ಜಿಲ್ಲೆಯಲ್ಲಿ ಒಟ್ಟು 333 ಕೋವಿಡ್-19 ಮೃತ ಪ್ರಕರಣಗಳು ದಾಖಲಾಗಿದ್ದು, ಈ ಪೈಕಿ ಒಟ್ಟು 263 ಅರ್ಜಿಗಳು ಸ್ವೀಕೃತವಾಗಿರುತ್ತದೆ.<br><br>ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಕೋವಿಡ್ ನಿಂದ ಮೃತಪಟ್ಟ ಎಲ್ಲಾ ಪ್ರಕರಣಗಳಲ್ಲಿ ರೂ.50000/-ಗಳ ಪರಿಹಾರಧನವನ್ನು ರಾಜ್ಯ ವಿಪತ್ತು ಪರಿಹಾರ ನಿಧಿ (SDRF)ಯಿಂದ ನೇರ ಹಣ ಸಂದಾಯದ ಮೂಲಕ ಫಲಾನುಭವಿಗಳಿಗೆ ಪಾವತಿಸಲಾಗುತ್ತಿದೆ. ಇದುವರೆವಿಗೆ ಪರಿಶೀಲಿಸಿ ಜಿಲ್ಲಾಧಿಕಾರಿಗಳು ಅನುಮೋದಿಸಲಾದ 186 ಫಲಾನುಭವಿಗಳಿಗೆ ಪರಿಹಾರ ಧನವನ್ನು ನೇರ ಹಣ ಸಂದಾಯದ ಮೂಲಕ ಬ್ಯಾಂಕ್ ಖಾತೆಗೆ ವರ್ಗಾಯಿಸಲಾಗಿದೆ. ಉಳಿಕೆ 77 ಅರ್ಜಿಗಳು ಪರಿಶೀಲನಾ ಹಂತದಲ್ಲಿರುತ್ತದೆ.<br><br>ಮುಂದುವರೆದು, ರಾಜ್ಯ ಸರ್ಕಾರವು ಬಿ.ಪಿಎಲ್ ಕುಟುಂಬದವರಿಗೆ ಘೋಷಿಸಿರುವ ರೂ.1.00 ಲಕ್ಷ ಪರಿಹಾರಕ್ಕಾಗಿ ಒಟ್ಟು 118 ಅರ್ಜಿಗಳು ಸ್ವೀಕೃತವಾಗಿದ್ದು, ಪರಿಶೀಲನಾ ಕಾರ್ಯ ಮುಗಿದ 115 ಫಲಾನುಭವಿಗಳಲ್ಲಿ ಮೊದಲನೆ ಕಂತಿನಲ್ಲಿ ಬಿಡುಗಡೆಯಾಗಿರುವ ರೂ.83.00 ಲಕ್ಷದಲ್ಲಿ 83 ಫಲಾನುಭವಿಗಳಿಗೆ ರೂ.1.00 ಲಕ್ಷ ಪರಿಹಾರವನ್ನು ಚೆಕ್ ಮೂಲಕ ವಿತರಿಸಲು ಜಿಲ್ಲಾಧಿಕಾರಿಗಳ ಹಂತದಲ್ಲಿ ಕ್ರಮವಹಿಸಲಾಗುತ್ತಿದೆ. ಪ್ರಸ್ತುತ ವಿಧಾನ ಪರಿಷತ್ತಿನ ಸ್ಥಳೀಯ ಸಂಸ್ಥೆಗಳ ಚುನಾವಣೆ ಪ್ರಕ್ರಿಯೆ ಜಾರಿಯಲ್ಲಿರುವ ಹಿನ್ನೆಲೆಯಲ್ಲಿ ಚೆಕ್ ವಿತರಣೆಗೆ ಸಾಧ್ಯವಾಗಿರುವುದಿಲ್ಲ. |

ಸಂ. DSSP- LCQ-30/2021

(ಆರ್.ಅಶೋಕ)
ಕಂದಾಯ ಸಚಿವರು